## ಹರ ಹರ ಪಾರ್ವತೀಪತಯೇ ಹರಹರ ಮಹದೇವ

ವಾಮದೇವ ವಿರಿಂಚಿತನಯ ಉಮಾಮನೋಹರ ಉಗ್ರ
ಧೂರ್ಜಟಿ ಸಾಮಜಾಜಿನವಸನಭೂಷಣ ಸುಮನಸೋತ್ತಂಸ |
ಕಾಮಹರ ಕೈಲಾಸಮಂದಿರ ಸೋಮಸೂರ್ಯಾನಲವಿಲೋಚನ
ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವ ||

**ವಾಮ** – ಸುಂದರವಾದ ರೂಪಗಳುಳ್ಳವರಿಗೆ ದೇವನೂ, **ವಿರಿಂಚಿಪುತ್ರ**–ಬ್ರಹ್ಮಪುತ್ರನೂ, ಉಮಾದೇವಿಯ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವವನೂ, **ಉಗ್ರ** – ಶತ್ರುಗಳಿಗೆ ಉಗ್ರಸ್ವರೂಪನೂ, **ದೂರ್ಜಟಿ** – ಜಟಾಧಾರಿಯೂ, ಗಜಚರ್ಮಾಂಬರಧಾರಿಯೂ, ದೇವತೆಗಳಿಗೆ ಒಡೆಯನೂ, **ಕಾಮಹರ** – ಮನ್ಮಥನನ್ನು ದಹಿಸಿದವನೂ, ಕೈಲಾಸವಾಸಿಯೂ, ಚಂದ್ರ, ಸೂರ್ಯ, ಅಗ್ನಿ ಎಂಬ ತ್ರಿನೇತ್ರನೂ ಆದ ರುದ್ರದೇವನು ನಮ್ಮ ಅಭೀಷ್ಟವನ್ನು ನೆರವೇರಿಸಲಿ. ( ಹ ರಿ ಕ ಥಾ ಮೃ ತ ಸಾ ರ – ಮ ಂ ಗ ಳಾ ಚ ರ ಣ ಸ ಂ ಧಿ )

ಫಣಿಗಣ ವರಭೂಷಃ ಪಾರ್ವತಿ ಶ್ಲಾಘ್ಯವೇಷಃ
ಖಲಜನಕೃತ ರೋಷಃ ಖಂಡಿತಾತ್ಮೀಯ ದೋಷಃ
ಸದರುಣಗಿರಿವಾಸಃ ಶಕ್ರಸೂರ್ಯಾದ್ಯಧೀಶಃ
ಪರಿಹೃತಭವಪಾಶಃ ಪಾತುಮಾಂ ಪಾರ್ವತೀಶಃ

**ಫಣಿಗಣ ವರಭೂಷ:** – ಸರ್ಪಗಳ ಸಮೂಹದಿಂದ ಉತ್ತಮವಾದ ಅಲಂಕಾರವುಳ್ಳ, **ಪಾರ್ವತೀಶ್ಲಾಘ್ಯವೇಷ:** – ಪಾರ್ವತಿಯಿಂದ ಹೊಗಳಿಸಿಕೊಳ್ಳುವ ವೇಷವುಳ್ಳ, **ಖಲಜನಕೃತ ರೋಷ:** – ದುರ್ಜನರಲ್ಲಿ ಸಿಟ್ಟುಮಾಡುವ, **ಖಂಡಿತಾತ್ಮೀಯ ದೋಷ:** – ತನ್ನನ್ನು ನಂಬಿದವರ ದೋಷಗಳನ್ನು ಪರಿಹರಿಸುವ, **ಶಕ್ರ–ಸೂರ್ಯಾದ್ಯಧೀಶ:** – ಇಂದ್ರ, ಸೂರ್ಯ ಮೊದಲಾದ ದೇವತೆಗಳಿಗೆ ಸ್ವಾಮಿಯಾದ, **ಭವಪಾಶ:** – ಸಂಸಾರಪಾಶವನ್ನು **ಪರಿಹೃತ:** – ಪರಿಹರಿಸುವ, **ಸದರುಣಗಿರಿವಾಸ:** – ಪವಿತ್ರವಾದ ಅರುಣಗಿರಿಯಲ್ಲಿ ವಾಸವಾಗಿರುವ, **ಪಾರ್ವತೀಶ:** –ಪಾರ್ವತೀಪತಿಯಾದ ಶಿವನು **ಮಾಂ ಪಾತು** – ನನ್ನನ್ನು ಕಾಪಾಡಲಿ.

ಶ್ರೀವಾದಿರಾಜರು ಅರುಣಾಚಲೇಶ್ವರ(ತಿರುವಣ್ಣಾಮಲೈ)ನನ್ನು ಸ್ತುತಿಸಿದ ಸ್ತೋತ್ರ

ಮೃತ್ಯುಂಜಯಾಯ ರುದ್ರಾಯ ನೀಲಕಂಠಾಯ ಶಂಭವೇ
ಅಮೃತೇಶಾಯ ಶರ್ವಾಯ ಮಹಾದೇವಾಯ ತೇ ನಮಃ

ಮರಣವನ್ನು ಜಯಿಸಿದವನೂ, ರೌದ್ರನಾದ, ಅಮೃತಮಥನಕಾಲದಲ್ಲಿ ಬಂದ ಹಾಲಾಹಲವಿಷವನ್ನು ವಾಯುದೇವರ ಅನುಗ್ರಹದಿಂದ ಭಕ್ಷಿಸಿ ನೀಲಕಂಠನಾದ, ಶುಭಸ್ವರೂಪನೂ, ಅಮೃತಸ್ವರೂಪನೂ, ಪಾರ್ವತೀರಮಣನೂ ಆದ ಮಹರುದ್ರದೇವರೇ, ನಿಮಗೆ ನಮಸ್ಕಾರವು.

## ೧. ರಾ ಗ – ಪ ಂ ತು ವ ರಾ ಳಿ : ತಾ ಳ – ಆ ದಿ ತಾ ಳ

ಪಾರ್ವತಿ ಪಾಲಿಸೆನ್ನ । ಮಾನಿನಿರನ್ನೆ ।
ಪಾರ್ವತಿ ಪಾಲಿಸೆನ್ನ । ಪ ।

ಪಾರ್ವತಿ ಭಕುತರ ಸಾರಥಿ ವಂದಿಪೆ
ಸುರಪತಿ ಗಜಮುಖಮೂರುತಿ ಮಾತೆ । ಅ ಪ ।

ಮನದಭಿಮಾನಿಯೆ ನೆನೆವೆನು ನಿನ್ನನು
ಅನುಕರಿಸೆನ್ನನು ಅಂಬುಜಪಾಣಿ । ೧ ।
ಮಂಗಳೆ ಮೃಡನಂತರಂಗಳೆ ಹರಿಪದ
ಭೃಂಗಳೆ ತುಂಗಳೆ ಪನ್ನಗವೇಣಿ । ೨ ।

ಗುಣಪೂರ್ಣ ವೇಣುಗೋಪಾಲವಿಟ್ಠಲನ್ನ
ಕಾಣಿಸಿ ಕೊಡುವಂತ ಶೂಲಿಯ ರಾಣಿ । ೩ ।

## ೨. ರಾ ಗ – ಶ ಂ ಕ ರಾ ಭ ರ ಣ : ತಾ ಳ – ಆ ದಿ ತಾ ಳ

ಪಶುಪತಿಯ ತೋರಮ್ಮ । ಅಮ್ಮಾ ಪಶುಪತಿಯ ತೋರಮ್ಮ
ವಿಷವ ಸವಿದ ರುಂಡಮಾಲನ । ತ್ರಿಭುವನಪಾಲನ । ನೀ
ಹಸನಾಗಿ ತೋರಮ್ಮ । ಪ ।

ಮೈನಾಕ ನಂದನೆ । ಮಾಡುವೆನು ವಂದನೆ
ಮನೋನಿಯಾಮಕನ । ಮುನಿವಂದಿತನ । ೧ ।

ಮತಿಯ ಕೊಡುವೆ ನೀ । ಹಿತದಿಂದ ನೋಡುವೆ
ಪತಿತ ಪಾವನ ಮೃತ್ಯುಂಜಯಯನ ।೨।

ತ್ರಿಜಗ ಪೂಜಿತೆ ಉಮೆ । ಪೊಗಳುವೆನಮ್ಮ
ವಿಜಯವಿಟ್ಠಲನ ನಿಜವನರಿತವನ ।೩।

### ೩. ಲಿಂಗಾ ಎನ್ನಂತರಂಗ

ರಾಗ – ಧನಾಸರಿ ತಾಳ – ಛಾಪುತಾಳ

ಲಿಂಗಾ ಎನ್ನಂತರಂಗ ॥ ಪ ॥
ಮಂಗಳಾಂಗ ಸರ್ವೋತ್ತುಂಗ ರಾಮ ಲಿಂಗ ॥ ಅ.ಪ ॥

ಮಂದಾಕಿನಿಧರಗೆ ಗಂಗಾಂಬು ಮಜ್ಜನವೆ ।
ಚಂದ್ರಮೌಳಿಗೆ ಗಂಧ ಸಮರ್ಪಣೆಯೆ ।
ಇಂದು ರವಿನೇತ್ರನಿಗೆ ಕರ್ಪೂರದಾರತಿಯೇ ।
ಕಂದರ್ಪಜನಕಗೆ ಮಿಗಿಲಾಪೇಕ್ಷೆಯೇ ॥ ೧ ॥

ಘನ ವಿದ್ಯಾತುರಗಗೆ ಮಂತ್ರ ಕಲಾಪವೆ ।
ಧನಪತಿಸಖಿಗೆ ಧನಕಾಣಿಕೆಯೆ ।
ಮನೆರಜತಪರ್ವತಗೆ ಮಣಿಮಾಯಾಭರಣವೇ ।
ಮನೋನಿಯಾಮಕಗೆ ಎನ್ನ ಬಿನ್ನಪವೆ ॥ ೨ ॥

ವೈರಾಗ್ಯನಿಧಿಗೆ ಈ ವಿಷಯಪದಾರ್ಥವೆ ।
ಗೌರಿಯ ರಮಣಗೆ ಈ ಸ್ತೋತ್ರವೆ ।
ವೀರರಾಘವ ವಿಜಯ ವಿಠಲನ್ನ ನಿಜ ಹಸ್ತ ।
ವಾರಿಜದಳದಿಂದ ಉದಿಸಿದ ಶಿವ ಮಹಾ ॥ ೩ ॥

**೪. ರಾಗ – ಮೋಹನ ಆದಿತಾಳ (ಗೋವಿಂದದಾಸರ ಕೃತಿ)**

ಶಿವ ಶಂಬೋ ಶಂಕರಾ । ಶಿವ ಸೋಮಶೇಖರಾ ।
ಶಿವನೆ ಗಂಗಾಧರ । ಶಿವ ಗೌರೀವರ ।
ಶಿವ ಚರ್ಮಾಂಬರ । ಶಿವ ಭವ ಭಯಹರ ।೧।

ಶಿವ ನೀಲಕಂಧರಾ । ಶಿವಕಾಲಾ ಸಂಹರಾ ।
ಶಿವನೇ ಜಟಾಧರ । ಶಿವ ರಜತೇಶ್ವರ ।
ಶಿವ ಶೂಲಾಧರ । ಶಿವನಿಗೆ ಶಿರ ಸರ ।೨।

ಶಿವ ಭಸ್ಮಾಲೇಪನಾ । ಶಿವ ವೃಷಭ ವಾಹನಾ ।
ಶಿವ ಫಣಿಭೂಷಣ ಶಿವಗೆ ತ್ರಿಲೋಚನ ।
ಶಿವ ಗೋವಿಂದನ । ಶಿವ ದಾಸರ ಪ್ರಿಯಾ ।೩।

**೫. ಶಂಕರಾಭರಣ ಆಟತಾಳ (ಗೋವಿಂದದಾಸರ ಕೃತಿ)**

ಶಂಭೋ ಶಿವ ಶಂಕರಾ । ಮಹೇಶ್ವರ ॥
ಶಂಭೋ । ಶಿವ ಶಂಕರ ಪರಮೇಶ್ವರ ॥

ಶಂಭು ಮಹೇಶ್ವರ । ಅಂಬಾಮನೋಹರ
ನಂಬಿದವರ ಕಾಯ್ವ । ಸಾಂಬ ದಿಗಂಬರ ॥೧॥

ನೀಲಕಂಧರ ವರ । ಬಾಲಚಂದಿರಧರ ॥
ಫಾಲಲೋಚನ ರುಂಡ । ಮಾಲಾಕಾಲನಕಾಲ ॥ ॥೨॥

ಅಂಧಕಾಸುರ ಹರ । ಮಂದಾಕಿನಿಧರ ॥
ನಂದಿ ಸವಾರ ಗೋ । ವಿಂದ ದಾಸವಂದ್ಯ ॥೩॥

## ೬. ರಾ ಗ – ಶ ಂ ಕ ರಾ ಭ ರ ಣ : ತಾ ಳ – ಆ ದಿ ತಾ ಳ

ಕುಣಿಯುತ ನಲಿಯುತ ಬಾ ಶಂಕರ
ಮಣಿಯುವೆ ನಿನ್ನಡಿಗನುದಿನ ಪುರಹರ । ಪ ।

ಢಣ ಢಣ ಢಣ ಎಂದು ಡಮರುಗ ಧ್ವನಿಸಲು
ಠಣ ಠಣ ಠಣ ಎಂದು ವೃಷಭವು ನಲಿಯೇ
ಝಣ ತಕ ತಕ ಕಿಟ ತಾಕಿಟ ತಕಕಿಟ
ಝಣ ಎಂದು ನಂದಿ ಮೃದಂಗವ ಬಾರಿಸೆ । ೧ ।
ಹರ ಹರ ಹರ ಎಂದು ಗಣಗಳು ನುತಿಸಲು
ಪೊರೆಯ್ಯೆ ಬಹುವಿಧ ಗಂಗೆಯರ್ ನಮಿಸೆ
ಸರಿಗಮ ಪದನಿಸ ಸ್ವರಗಳ ಪಾಡುತ
ನಾರದ ತುಂಬುರು ಗಾನವ ಮಾಡಲು । ೨ ।

ವರಕಮಲೇಶನ ಚರಿತೆಯ ಜಗದೊಳು
ಪರಿ ಪರಿ ಭಾವದಿ ನರ್ತಿಸಿ ತೋರುತ
ಪೊರೆಯುತ ಭಕುತರ ವರವೀಯುತ ಬಾ
ಗಿರಿಜಾಲಂಗಿತ ನಾಟ್ಯಾಚಾರ್ಯ । ೩ ।

## ೭. ರಾ ಗ – ಶಂಕರಾಭರಣ : ತಾ ಳ – ಆ ದಿ ತಾ ಳ

ನಮ: ಪಾರ್ವತೀಪತಿ ನತಜನಪರ ನಮೋ ವಿರೂಪಾಕ್ಷ । ಪ ।
ರಮಾರಮಣನಲಿ ಅಮಲಭಕುತಿ ಕೊಡು ನಮೋ ವಿಶಾಲಾಕ್ಷ । ಅ ಪ ।

ನೀಲಕಂಠ ತ್ರಿಶೂಲ ಡಮರು ಹಸ್ತಾಲಂಕೃತ ರಕ್ಷ
ಫಾಲನೇತ್ರ ಕಪಾಲ ರುಂಡಮಣಿ ಮಾಲಾಧೃತ ವಕ್ಷ
ಶೀಲರಮ್ಯ ವಿಶಾಲ ಸುಗುಣ ಸಲ್ಲೀಲ ಸುರಾಧ್ಯಕ್ಷ
ಶ್ರೀಲಕುಮೀಶನ ಓಲೈಸುವ ಭಕ್ತಾವಳಿಗಳ ಪಕ್ಷ । ೧ ।

ವಾಸವನುತ ಹರಿದಾಸ ಈಶ ಕೈಲಾಸವಾಸ ದೇವ
ದಾಶರಥಿಯ ಔಪಾಸಕ ಸುಜನರ ಪೋಷಿಪ ಪ್ರಭಾವ
ಭಾಸಿಸುತಿಹುದು ಅಶೇಷ ಜೀವರಿಗೆ ಈಶನೆಂಬ ಭಾವ
ಶ್ರೀಶನಲ್ಲಿ ಕೀಲಿಸು ಮನವ ಗಿರಿಜೇಶ ಮಹಾದೇವ । ೨ ।

ಮೃತ್ಯುಂಜಯ ನಿನ್ನುತ್ತಮ ಪದಯುಗ ಭೃತ್ಯನೊ ಸರ್ವತ್ರ
ಹತ್ತಿರ ಕರೆದು ಅಪತ್ಯನಂತೆ ಪೊರೆಯುತ್ತಿರೊ ತ್ರಿನೇತ್ರ
ತೆತ್ತಿಗನಂತೆ ಕಾಯುತ್ತಿಹೆ ಬಾಣನ ಸತ್ಯದಿ ಸುಚರಿತ್ರ
ಕರ್ತೃ ಉಡುಪಿ ಸರ್ವೋತ್ತಮ ಶ್ರೀಕೃಷ್ಣನ ಪೌತ್ರ ಕೃಪಾಪಾತ್ರ । ೩ ।

೮. ರಾ ಗ – ಶ ಂ ಕ ರಾ ಭ ರ ಣ : ತಾ ಳ – ಅ ಟ ತಾ ಳ

ನಂಜುಂಡ ನಮ್ಮ ಗುರು । ನಂಜುಂಡ । ಪ ।

ನಂಜುಂಡ ನತಜನಪಾಲ । ಭವ ಭಂಜನ ಕರುಣಾಲವಾಲ ॥ ಆಹಾ ॥
ಆಂಜನೇಯನ ಪ್ರಿಯ ಅಂಜಲಿ ಮುಗಿವೆನು ।
ಕಂಜನಾಭನ ಪಾದಕಂಜವ ತೋರಿಸೊ । ಅ ಪ ।

ರಕ್ಕಸಾಂತಕ ದೇವ ಬಿರುದಾ। ಕರಿ ॥
ತೊಕ್ಕನುಟ್ಟ ಚಂದ್ರ ಶಿರದಾ । ಮುನಿ ॥
ಮಾರ್ಕಂಡೇಯಗೆ ಆಯುವರದಾ ದೇ–
ವರ್ಕಳಿಗಭೀಷ್ಟೆಯ ಗರೆದ । ಆಹಾ ॥
ಪೊಕ್ಕಳ್ಹೂವಿನ ವಿಷ್ಣುಭಕ್ತಿಯ ಎನಗಿತ್ತು
ಚೊಕ್ಕಚಿತ್ತನ ಮಾಡೊ ಮುಕ್ಕಣ್ಣ ಮಹದೇವ । ೧ ।

ಇಂದ್ರಾದಿ ಸುರಮುನಿವಂದ್ಯ । ಪಾದ–
ಕೆಂದಾವರೆಯ ಗುಣಸಾಂದ್ರ । ಅಜನಂದನ ಸತತ ಆನಂದ ॥
ಗುರು ಗಂಧವಾಹನನ ಕಂದ ॥ ಆಹಾ ॥
ವಂದಿಸುವೆನು ಮನಮಂದಿರದಲಿ
ರಾಮಚಂದ್ರನ ನೋಡುವಾನಂದ ಭಾಗ್ಯವನೀಯೋ । ೨ ।

ವಿಷಕಂಧರನೆ ವೀತಭಯನೆ । ವರ–
ವೃಷಕೇತು ವೈಷ್ಣವೋತ್ತಮನೇ । ನಮ್ಮಶಶಿಮುಖಿ ಗೌರಿನಾಯಕನೆ ।
ನಿನಗೆ ನಮಿಸುವೆ ಕರುಣಾಳು ಶಿವನೆ ॥ ಆಹಾ ॥
ಭಸಿತ ಭೂಷಿತವಾದ ಶಶಿಸನ್ನಿಭಾಂಗನೆ
ನಸುನಗೆಯ ಮುಖವ ತೋರಿಸೊ ಶಂಕರನೆ । ೩ ।

ಮನಸಿನ ಚಾಪಲ್ಯ ಬಿಡಿಸೊ ।
ಮಧ್ವಮುನಿ ಕೃಪಾ ಕವಚವ ತೊಡಿಸೊ ।
ಕ್ಷಣಕ್ಷಣದಲಿ ಹರಿನಾಮ ನುಡಿಸೊ ।
ದಿವ್ಯಘನ ವೈರಾಗ್ಯ ಭಾಗ್ಯ ಉಣಿಸೊ ॥ ಆಹಾ ॥
ಕನಸು ಮನಸಿಲಿ ಹರಿರೂಪ ಗುಣಕ್ರಿಯೆ ।

ನೆನಹಿತ್ತು ಸಂತೈಸು ಅಗಜೆಗಾನಂದವೀವ ।೪।

ಮುನಿವೇಷವನು ತಾಳಿ ನೃಪಗೆ ।
ಶ್ರೀ ವಿಷ್ಣುವಿನ ಕಥೆ ಅರುಹಿದೆ ಸದ್ಗತಿಗೆ ।
ಮಾರ್ಗವನೆ ಮಾಡಿ ಸಲಹಿದೆ ಕೊನೆಗೆ ।
ಕರುಣೆಗಳೊಳು ಎಣೆಯಾರೊ ನಿನಗೆ ॥ ಆಹಾ ॥
ಗುಣನಿಧಿ ಬಾದರಾಯಣವಿಟ್ಠಲನ ಧ್ಯಾನ
ನೆನಹಿತ್ತು ಸಂತೈಸು ಗಣಪ ಷಣ್ಮುಖರಯ್ಯ ।೫।

## ೯. ರಾಗ – ಧನ್ಯಾಸಿ : ತಾಳ – ಆದಿ ತಾಳ

ಚಂದ್ರಚೂಡ ಶಿವಶಂಕರ ಪಾರ್ವತಿರಮಣ ನಿನಗೆ ನಮೋ ।ಪ।
ಸುಂದರ ಮೃಗವರ ಪಿನಾಕಿಧನುಕರ ಗಂಗಾಶಿರ ಗಜಚರ್ಮಾಂಬರಧರ ।ಅ ಪ।

ನಂದಿವಾಹನಾನಂದದಿಂದ ಮೂರ್ಜಗದಿ ಮೆರೆವನು ನೀನೆ
ಅಂದು ಅಮೃತ ಘಟದಿಂದುದಿಸಿದ ವಿಷ ತಂದು ಭುಜಿಸಿದವ ನೀನೆ
ಕಂದರ್ಪನ ಕ್ರೋಧದಿಂದಲಿ ಕೊಂದ ಉಗ್ರನು ನೀನೆ
ಇಂದಿರೇಶ ಶ್ರೀರಾಮನ ನಾಮವ ಚೆಂದದಿ ಪೊಗಳುವ ನೀನೆ ।೧।

ಬಾಲಮೃಕಂಡನ ಕಾಲನು ಎಳೆವಾಗ ಪಾಲಿಸಿದವ ನೀನೆ
ವಾಲಯದಿ ಕಪಾಲ ಪಿಡಿದು ಭಿಕ್ಷೆ ಬೇಡೊ ದಿಗಂಬರ ನೀನೆ
ಕಾಲಕೂಟವನು ಪಾನಮಾಡಿದ ನೀಲಕಂಠನು ನೀನೆ
ಜಾಲಮಾಡಿದ ಗೋಪಾಲ ಎಂಬ ಹೆಣ್ಣಿಗೆ ಮರುಳಾದವ ನೀನೆ ।೨।

ಧರೆಗೆ ದಕ್ಷಿಣ ಕಾವೇರಿತೀರ ಕುಂಭಪುರವಾಸನು ನೀನೆ
ಕರದಲಿ ವೀಣೆಯ ಗಾನವ ಮಾಡುವ ಉರಗಭೂಷಣನು ನೀನೆ
ಕೊರಳಲಿ ರುದ್ರಾಕ್ಷಿ ಭಸ್ಮವ ಧರಿಸಿದ ಪರಮವೈಷ್ಣವನು ನೀನೆ
ಗರುಡಗಮನ ಶ್ರೀಪುರಂದರವಿಟ್ಠಲಗೆ ಪ್ರಾಣಪ್ರಿಯನು ನೀನೆ ।೩।

## ೧೦. ರಾ ಗ – ತೋ ಡಿ : ತಾ ಳ – ಆ ದಿ ತಾ ಳ

ಶಂಭೋ ಸ್ವಯಂಭು ಸಂಭವ ನಂಬಿದೆ ಕಾಯೊ ।
ಜಂಭಾರಿನುತ ಅಭವ । ಪ ।
ಅಂಬರಪುರಹರ ಸಾಂಬ ತ್ರಿಯಂಬಕ ।
ಶಂಬರಾರಿ ರಿಪು ಗಂಭೀರ ಕರುಣೀ । ಅ ಪ ।

ಭಸಿತಭೂಷಿತ ಶರೀರ ಭಕ್ತರಾಧಾರ । ವಿಷಕಂಠ ದುರಿತಹರ ।
ಪಶುಪತಿ ಫಣಿಹಾರ ಪಾವನ್ನಕರ । ತ್ರಿಶೂಲಡಮರುಗಧರ ।
ನೊಸಲನಯನ ವಿಕಸಿತ ಅಂಬುಜಮುಖ । ಶಶಿಧರ ಮೂಕರಕ್ಕಸ ಮದಮರ್ದನ ।
ಘಸಣೆಗೊಳಿಸುವ ತಾಮಸವ ಕಳೆದು । ಮಾನಸದಲಿ ರಂಗನ ಬಿಸಜ ಪಾದವ ತೋರೊ ॥ ೧ ॥
ರಜಿತಪರ್ವತ ನಿವಾಸ ನಿರ್ಮಲಭಾಸ । ಗಜದೈತ್ಯನಾಶ ಗಿರೀಶ ।
ಸುಜನರ ಮನೋವಿಲಾಸ ವ್ಯೋಮಕೇಶ । ತ್ರಿಜಗದಲ್ಲಣ ಗೌರೀಶ ।
ಅಜಸುತನಧ್ವರ ಭಜನೆಯ ಕೆಡಿಸಿದ । ಅಜಗರಮಂದಿರ ಗಜಮುಖ ಜನಕನೆ ।
ಗಜಗಮನ ಮುನಿ ತನುಜನ ಕಾಯ್ದನೆ । ವ್ರಜಮುನಿ ವಂದಿತ ಭಜಿಸುವೆ ನಿನ್ನ ॥ ೨ ॥

ಮಧುರಾಪುರೀ ನಿಲಯ ಮೃತ್ಯುಂಜಯ । ಸದ ಮಲ ಸುಮನಸಗೇಯ ।
ಸದಾ ನಮಿಪರ ಹೃದಯಸ್ತ ಚಕ್ಕನಾಥ। ಸದೆ ಪಾಪ ಕೊಡು ಅಭಯ ।
ಸದಾಶಿವ ಜಾನ್ಹವೀಧರ ಕೃತಮಾಲಾ । ನದೀತೀರದಿ ವಾಸವಾಗಿಪ ಸೌಂದರ್ಯ ।
ಮಧುರಿಪು ವಿಜಯಟ್ಠಲನ ಪದಾಬ್ಜಕೆ । ಮಧುಪನೆನಿಪ ಪಂಚವದನ ಕೈಲಾಸ ॥ ೩ ॥

## ೧೧. ರಾಗ – ಮಧ್ಯಮಾವತಿ : ತಾಳ – ಅಟತಾಳ

ಧವಳಗಂಗೆಯ ಗಂಗಾಧರ ಮಹಲಿಂಗ ।ಪ।
ಮಾಧವನ ತೋರಿಸಯ್ಯ ಗುರುಕುಲೋತ್ತುಂಗ ।ಅ.ಪ।

ಅರ್ಚಿಸಿದವರಿಗಭೀಷ್ಟವ ಕೊಡುವ
ಹೆಚ್ಚಿದ ಅಘಗಳ ಬೇಗನೆ ತರಿವ
ದುಶ್ಚರಿತರನೆಲ್ಲ ದೂರದಲ್ಲಿಡುವ
ನಮ್ಮಚ್ಯುತಗಲ್ಲದ ಅಸುರರ ಬಡಿವ ।೧।

ಮಾರನ ಗೆದ್ದ ಮನೋಹರಮೂರ್ತಿ
ಸಾರ ಸಜ್ಜನರಿಗೆ ಸುರಚಕ್ರವರ್ತಿ
ಧಾರಿಣಿಯೊಳಗೆ ತುಂಬಿದೆ ನಿನ್ನ ಕೀರ್ತಿ
ಮುರಾರಿಯ ತೋರಿಸಯ್ಯ ನಿನಗೆ ಶರಣಾರ್ಥಿ ।೨।

ಚೆನ್ನಪ್ರಸನ್ನ ಶ್ರೀ ಹಯವದನನ್ನ
ಅನುದಿನ ನೆನೆವಂತೆ ಮಾಡೊ ನೀ ಎನ್ನ
ಅನ್ಯನರಿಯೆನೊ ಗುರುವೆಂಬೆ ನಿನ್ನ
ಇನ್ನಾದರು ಹರಿಯ ತೋರೊ ಮುಕ್ಕಣ್ಣ ।೩।

## ೧೨. ರಾ ಗ – ಕಾ ಂ ಬೋ ದಿ : ತಾ ಳ – ಝ ಂ ಪೆ ತಾ ಳ

ಕೈಲಾಸವಾಸ ಗೌರೀಶ ಈಶ ।ಪ।
ತೈಲಧಾರೆಯಂತೆ ಮನಸು ಕೊಡು ಹರಿಯಲ್ಲಿ ಶಂಭೋ ।ಅ ಪ।

ಅಹೋ ರಾತ್ರಿಯಲಿ ನಾನು ಅನುಚರಾಗ್ರಣಿಯಾಗಿ
ಮಹಿಯೊಳಗೆ ಚರಿಸಿದೆನೊ ಮಹದೇವನೆ
ಅಹಿಭೂಷಣನೆ ಎನ್ನ ಅವಗುಣಗಳೆಣಿಸದಲೆ
ವಿಹಿತ ಧರ್ಮದಿ ಕೊಡು ವಿಷ್ಣು ಭಕುತಿಯನು ಶಂಭೋ ।೧।

ಮನಸು ಕಾರಣವಲ್ಲ ಪಾಪ ಪುಣ್ಯಕ್ಕೆಲ್ಲ
ಅನಲಾಕ್ಷ ನಿನ್ನ ಪ್ರೇರಣೆಯಲ್ಲದೆ
ದನುಜ ಗಜ ಮದ ಹಾರಿಯೆ ದಂಡ ಪ್ರಣಾಮವ ಮಾಳ್ಪೆ
ಮಣಿಸು ಈ ಮನವ ಸಜ್ಜನರ ಚರಣದಿ ಶಂಭೋ ।೨।

ಭಾಗೀರಥೀ ಧರನೆ ಭಯವ ಪರಿಹರಿಸಯ್ಯ
ಲೇಸಾಗಿ ಒಲಿದು ಸಂತತ ಶರ್ವದೇವ
ಭಾಗವತ ಜನಪ್ರಿಯ ವಿಜಯವಿಟ್ಠಲನಂಘ್ರಿ
ಜಾಗುಮಾಡದೆ ಭಜಿಪ ಭಾಗ್ಯವನು ಕೊಡು ಶಂಭೋ ।೩।

**೧೩. ರಾಗ – ಶಂಕರಾಭರಣ : ತಾಳ – ಆದಿತಾಳ**

ಎಂಥಾ ಚಲುವಗೆ ಮಗಳನು ಕೊಟ್ಟನು
ಗಿರಿರಾಜನು ನೋಡಮ್ಮಮ್ಮ ।ಪ।

ಕಂತುಹರ ಶಿವ ಚೆಲುವನೆನ್ನುತ
ಮೆಚ್ಚಿದನು ನೋಡಮ್ಮಮ್ಮ ।ಅ ಪ।

ಮೋರೆ ಐದು ಮೂರು ಕಣ್ಣು । ವಿಪರೀತವ ನೋಡಮ್ಮಮ್ಮ ।
ಕೊರಳೊಳು ರುಂಡ ಮಾಲೆಯ ಧರಿಸಿದ । ಉರಗಭೂಷಣನ ನೋಡಮ್ಮಮ್ಮ ।೧।

ತಲೆಯೆಂಬೋದು ನೋಡಿದರೆ ಜಡೆ । ಹೊಳೆಯುತಿದೆ ನೋಡಮ್ಮಮ್ಮ ।
ಹಲವು ಕಾಲದ ತಪಸಿ ರುದ್ರನ । ಮೈಬೂದಿಯ ನೋಡಮ್ಮಮ್ಮ ।೨।

ಭೂತ ಪ್ರೇತ ಪಿಶಾಚಿಗಳೆಲ್ಲ ಪರಿವಾರವು ನೋಡಮ್ಮಮ್ಮ ।
ಈತನ ನಾಮವು ಒಂದೇ ಮಂಗಳ ಮುಪ್ಪುರಹರನ ನೋಡಮ್ಮಮ್ಮ ।೩।

ಮನೆಯೆಂಬೋದು ಸ್ಮಶಾನವು ನೋಡೆ । ಗಜ ಚರ್ಮಾಂಬರವಮ್ಮಮ್ಮ ।
ಹಣವೊಂದಾದರು ಕೈಯೊಳಗಿಲ್ಲ । ಕಪ್ಪರವನು ನೋಡಮ್ಮಮ್ಮ ।೪।

ನಂದಿವಾಹನ ನೀಲಕಂಠನ । ನಿರ್ಗುಣನ ನೋಡಮ್ಮಮ್ಮ ।
ಇಂದಿರೆರಮಣ ಶ್ರೀ ಪುರಂದರವಿಟ್ಠಲನ । ಪೊಂದಿದವನ ನೋಡಮ್ಮಮ್ಮ। ೫ ।

## ೧೪. ರಾ ಗ – ಆ ರ ಭಿ : ತಾ ಳ – ಆ ದಿ ತಾ ಳ

ನೀಲಲೋಹಿತ ಡಮರುಗ ತ್ರಿಶೂಲಶೋಭಿತ ।ಪ।

ಫಾಲನಯನ ಶುಂಡಾಲಚರ್ಮಸುದು
ಕೂಲ ಮೃಡ ಸತತ ಪಾಲಿಸು ಕರುಣದಿ ।ಅ ಪ।

ನಂದಿವಾಹನ ನಮಿಪೆ ಖಳವೃಂದಮೋಹನ
ಅಂಧಕರಿಪು ಶಿಖಿಸ್ಯಂದನಸನಕ ಸ–
ನಂದನಾದಿ ಮುನಿವಂದಿತಪದಯುಗ ।೧।

ಸೋಮಶೇಖರ ಗಿರಿಜಾ ಸುತ್ರಾಮಲೇಖರ
ಸ್ತೋಮ ವಿನುತ ಭವಭೀಮಭಯಾಂತಕ
ಕಾಮರಹಿತ ಗುಣಧಾಮ ದಯಾನಿಧೆ ।೨।

ನಾಗಭೂಷಣ ವಿಮಲ ಸದ್ರಾಗ ಭಾಷಣ
ಭೋಗಿಶಯನ ಜಗನ್ನಾಥವಿಟ್ಠಲನ
ಯೋಗದಿ ಒಲಿಸುವ ಭಾಗವತರಲ್ಲಿಡು ।೩।

## ೧೫. ರಾ ಗ – ಮೋ ಹ ನ : ತಾ ಳ – ಆ ದಿ ತಾ ಳ

ಶಿವನೇ ನಾ ನಿನ್ನ ಸೇವಕನಯ್ಯ ದುಮ್ಮನ ಬಿಡಿಸಯ್ಯ ।ಪ।

ಕರುಣದಿ ಪಿಡಿಕೈಯಾ ಸಿರಿಧರನಮಯ್ಯ
ಭವಮೋಚಕ ಭಾಗವತಶಾಸ್ತ್ರವ । ಅವನೀಶಗೆ ಪೇಳ್ದವ ನೀನಲ್ಲವೆ ।ಅ ಪ।

ವೈಕಾರಿಕ ತೈಜಸ ತಾಮಸವೆಂಬ । ತ್ರೈತತ್ವಗಳೆಂಬ
ಸಾಕಾರಿ ಶಾರ್ವರಿ ಧವಧರಸಾಂಬ ಸುರಪಾದ್ಯರ ಬಿಂಬ ।
ವೈಕಲ್ಯಾಸ್ಪದವ ಕಳೆದೊಮ್ಮೆಲೆ
ವೈಕುಂಠಕೆ ಕರೆದೊಯ್ ಕರಿಗೊರಳ ।೧।

ಮೃತ್ಯುಂಜಯ ಮುಪ್ಪುರಹರ ಮಹದೇವ ದೇವರ್ಕಳ ಕಾವಾ ।
ಸ್ತುತ್ಯಾದಿಜ ದಿತಿಜತತೀವನದಾವ । ದುರಿತಾಂಬುಧಿನಾವಾ ।
ಕೃತ್ತಿವಾಸ ಎನ್ನತ್ಯಪರಾಧಗ–
ಳೆತ್ತೆಣಿಸದೆ ಕೃತಕೃತ್ಯನ ಮಾಡೈ ।೨।

ಗಂಗಾಧರ ಷಣ್ಮುಖಗಣಪರ ತಾತ ತ್ರೈಲೋಕ್ಯ ತ್ರಾತಾ ।
ಲಿಂಗಾಹ್ವಯ ತಾರಕಹರ ನಿರ್ಭೀತಾ–ಭುವನಾಧಿನಾಥಾ ।
ತುಂಗಮಹಿಮ ನಿಸ್ಸಂಗ ಹರಿಯ ದ್ವಿತಿ–
ಯಂಗ ಡಮರು ಶೂಲಂಗಳ ಪಿಡಿದಿಹ ।೩।

ಪಂಚಾನನ ಪನ್ನಗಭೂಷಣ ಭೀಮ ಭುವನಾಭಿರಾಮ
ಸಂಚಿತನ ಮಾಡುವ ಸಂತತನೇಮ ಶ್ರೀರಾಮನಾಮ
ಪಂಚಶರಾರಿ ವಿರಿಂಚಿಕುವರ ನಿ–
ಷ್ಕಿಂಚರೊಡೆಯನ ಮಂಚಪದಾರ್ಹನೆ ।೪।

ಸ್ಫಟಿಕಾಭ ಕಪಾಲಿ ಕಾಮಿತ ಫಲದಾ ।
ಫಲ್ಗುಣ ಸಖ ಶ್ರೀದವಿಠ್ಠಲಾಹ್ವಯವಿತ್ತಪವಿತ್ತ ದ್ವಿರದಾ ।
ಚರ್ಮಾಂಬರನಾದಾ । ಕುಟಿಲರಹಿತ ಧೂರ್ಜಟಿ ವೃಷಭಧ್ವಜ ।
ನಿಟಿಲನಯನ ಸಂಕಟವ ನಿವಾರಿಸು ।೫।

## ೧೬. ರಾಗ – ಕಲ್ಯಾಣಿ : ತಾಳ – ಏಕತಾಳ

ಹರಹರ ಪುರಹರ ಗಿರಿಜಾ ಮನೋಹರ
ಸುರವರ ಕರುಣಾಕರ ಶರಣರ ಸುರತರು
ವರಪಂಪಾಪತಿ ವಿರುಪಾಂಬಕ ಹೋ ಶುಭದ ।ಪ।

ಮದನನ ಮಥನ ಪಂಚವದನ ಕೈಲಾಸದ
ಸದನ ಸದಾಶಿವ ನಮೋ ನಮೋ
ಹದಿನಾಕು ಭುವನದ ಹದನ ಬಲ್ಲರಿಜಿತ
ಕದನ ಕಲುಷಹರ ನಮೋ ನಮೋ ।೧।

ತಾರಕಪತಿವರ ಭೂರಿಕೃಪಾಂಬುಧಿ
ತಾರಕ ಪಿತಹರ ಜಯಾ ಜಯ
ತಾರಕ ಉಪದೇಶಕಾರಕ ಘನಭವ
ತಾರಕ ಮೃತ್ಯುಂಜಯಾ ಜಯ ।೨।

ಶೇಷಾಭರಣ ವಿಭೂಷಾಭವ ವಿ–
ಶೇಷಾಭಕುತಪ್ರಿಯ ವಿಭೊ
ಶೇಷಾ ಭೂಭೃತಪೋಷ ಪ್ರಸನ್ವೆಂಕ
ಟೇಶ ಭಜನ ಶೀಲ ವಿಭೊ ವಿಭೊ ।೩।

## ೧೭. ರಾ ಗ – ಮ ಲ ಯ ಮಾ ರು ತ : ತಾ ಳ – ಆ ದಿ ತಾ ಳ

ಪಾಹಿಮಾಂ ಪಾಹಿ ಶಿವಹರ ಮೃಡ ಶಂಭೊ ।ಪ।

ಅದ್ರಿಧರಪ್ರಿಯ ಅದ್ರಿಕೃತಾಲಯ
ಅದ್ರಿಜಾಮಾತಾದ್ರಿರಿಪುನುತ
ಅದ್ರಿಜೆಪತಿ ಪಾಪಾದ್ರಿಕುಲಿಶ ಕನ
ಕಾದ್ರಿ ಶರಾಸನಮುದ್ರಿತಪಾಣೆ ।೧।

ಉನ್ಮತದಿಂದಲಿ ಮನ್ಮಥ ಬರಲು ದ–
ಹನ್ಮಾಡಿದ ಷಣ್ಮುಖಜನಕನೆ
ಉನ್ಮನಯೋಗಿ ಸನ್ನುತಲೀಲ
ಜನ್ಮರಹಿತ ಘನಚಿನ್ಮಯರೂಪ ।೨।

ಭರಿಸಿದ ಗಂಗೆಯನಿರಿಸಿದೆ ಜಡೆಯೊಳು
ಧರಿಸಿದೆ ಚಂದ್ರನ ಮೆರೆಸಿದೆ ಭಕ್ತರ
ಗುರುಮಹಿಪತಿಯಂಕುರಿಸಿದ ಬಾಲನ
ಸಿರಸದಲಿಡು ನಿಜಪರಸಾದ ಕೈಯ ।೩।

## ೧೮. ಮನೋ ನಿಯಾಮಕ ಮಹರುದ್ರದೇವರು ಹರಿಕಥಾಮೃತಸಾರ)

ವಾಮದೇವ ವಿರಿಂಚಿತನಯ ಉಮಾಮನೋಹರ ಉಗ್ರ
ಧೂರ್ಜಟಿ ಸಾಮಜಾಜಿನವಸನಭೂಷಣ ಸುಮನಸೋತ್ತಂಸ ।
ಕಾಮಹರ ಕೈಲಾಸಮಂದಿರ ಸೋಮಸೂರ್ಯಾನಲವಿಲೋಚನ
ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವ ॥

ಕೃತ್ತಿವಾಸನೆ ಹಿಂದೆ ನೀ ನಾಲ್ವತ್ತು ಕಲ್ಪ ಸಮೀರನಲಿ ಶಿ–
ಷ್ಯತ್ವ ವಹಿಸ್ಯಖಿಳಾಗಮಾರ್ಥ್ಗಗಳೋದಿ ಜಲಧಿಯೊಳು ।
ಹತ್ತುಕಲ್ಪದಿ ತಪವಗೈದಾದಿತ್ಯರೊಳುತ್ತಮನೆನಿಸಿ ಪುರು–
ಷೋತ್ತಮನ ಪರಿಯಂಕಪದವೈದಿದೆಯೊ ಮಹದೇವ ॥

ನಂದಿವಾಹನ ನಳಿನಿಧರ ಮೌಳೀಂದುಶೇಖರ ಶಿವ ತ್ರಿಯಂಬಕ
ಅಂಧಕಾಸುರಮಥನ ಗಜಶಾರ್ದೂಲಚರ್ಮಧರ ।
ಮಂದಜಾಸನತನಯ ತ್ರಿಜಗದ್ವಂದ್ವ ಶುದ್ಧಸ್ಫಟಿಕಸನ್ನಿಭ
ವಂದಿಸುವೆನನವರತ ಪಾಲಿಸು ಪಾರ್ವತೀರಮಣ ॥

ಫಣಿಫಣಾಂಚಿತಮಕುಟ ರಂಜಿತ ಕ್ವಣಿತಡಮರುತ್ರಿಶೂಲ
ಶಿಖಿದಿನಮಣಿನಿಶಾಕರನೇತ್ರ ಪರಮಪವಿತ್ರ ಸುಚರಿತ್ರ ।
ಪ್ರಣತಕಾಮದ ಪ್ರಮಥಸುರಮುನಿಗಣಸುಪೂಜಿತ ಚರಣಯುಗ ರಾ–
ವಣಮದವಿಭಂಜನ ಸತತ ಮಾಂ ಪಾಹಿ ಮಹದೇವ ॥

ದಕ್ಷಯಜ್ಞವಿಭಂಜನನೆ ವಿರೂಪಾಕ್ಷ ವೈರಾಗ್ಯಾಧಿಪತಿ ಸಂ–
ರಕ್ಷಿಸೆಮ್ಮನು ಸರ್ವಕಾಲದಿ ಸನ್ಮುದವನಿತ್ತು ।
ಯಕ್ಷಪತಿಸಖ ಯಜಿಪರಿಗೆ ಸುರವೃಕ್ಷ ವೃಕದನುಜಾರಿ ಲೋಕಾ–
ಧ್ಯಕ್ಷ ಶ್ಯಕ ದೂರ್ವಾಸ ಜೈಗೀಷವ್ಯ ಸಂತೈಸು ।

ಹತ್ತುಕಲ್ಪದಿ ಲವಣಜಲಧಿಯೊಳುತ್ತಮಶ್ಲೋಕನ ಒಲಿಸಿ ಕೃತ–
ಕೃತ್ಯನಾಗಿ ಜಗತ್ಪತಿಯ ನೇಮದಿ ಕುಶಾಸ್ತ್ರಗಳ ।
ಬಿತ್ತರಿಸಿ ಮೋಹಿಸಿ ದುರಾತ್ಮರ ನಿತ್ಯನಿರಯನಿವಾಸರೆನಿಸಿದ
ಕೃತ್ತಿವಾಸಗೆ ನಮಿಪೆ ಶೇಷಪದಾರ್ಹನಹುದೆಂದು ॥

## ೧೯. ವೃಷಭನೇರಿದ ವಿಷಧರನ್ಯಾರೇ

ರಾಗ – ಗುಂಡಕ್ರಿಯೆ ತಾಳ – ಆದಿತಾಳ

ವೃಷಭನೇರಿದ ವಿಷಧರನ್ಯಾರೇ ಪೇಳಮ್ಮಯ್ಯ । ಪ ।
ಹಸುಳೆ ಪಾರ್ವತಿಯ ತಪಸಿಗೆ ಮೆಚ್ಚಿದ
ಜಟಾಮಂಡಲಧಾರಿ ಕಣಮ್ಮ । ಅ.ಪ ।

ಕೈಲಾಸಗಿರಿಯ ದೊರೆಯಿವನಮ್ಮ – ಅದು ಅಲ್ಲದೆ ಕೇಳೆ ।
ಬೈಲು ಸ್ಮಶಾನವು ಮನೆಯಿವಗಮ್ಮ – ಸಂಕರ್ಷಣನೆಂದು
ಕೇಳೆ ಮಹಿಯೊಳು ಜನ ಪೊಗಳುವರಮ್ಮ – ಇದು ನಿಜವಮ್ಮ
ನಾಲಿಗೆಸಾಸಿರ ಫಣಿಭೂಷಣನಮ್ಮ – ರಮೆಯರಸಗೆ ಇವ ಮೊಮ್ಮಗನಮ್ಮ ॥ ೧ ॥

ಬಾಲೆ ದಾಕ್ಷಾಯಿಣಿಪತಿ ಇವನಮ್ಮ – ಮಾವನ ಯಾಗದಲಿ
ಬಾಳ ಕೃತ್ಯಗಳ ನಡೆಸಿದನಮ್ಮ – ಸಾಗರದಲಿ ಪುಟ್ಟಿದ
ಕಾಲಕೂಟವ ಭಕ್ಷಿಸಿದೆನಮ್ಮ – ರಾಮನ ದಯವಮ್ಮ
ಮೇಲೆ ಉಳಿಯಲು ಶೇಷಗರಳವು – ನೀಲಕಂಠನೆಂದೆನಿಸಿದನಮ್ಮ ॥ ೨ ॥

ಹರನೊಂದಿನ ವೈಕುಂಠಕೆ ಬರಲು – ತಾತಗೆ ವಂದಿಸಲು
ತರುಣಿರೂಪವ ನೋಡಬೇಕೆನಲು – ಹರಿ ತಾ ನಸುನಗಲು
ಕರೆದು ಸೈರಿಸಲಾರೆ ನೀ ಎನಲು – ಹಠದಿ ಕುಳ್ಳಿರಲು
ಕರುಣಿಗಳರಸನು ಹರನ ಮನವ ನೋಡಿ ಅರುಣೋದಯಕೆ ಬಾರೆಂದು ಕಳುಹಿದ ॥ ೩ ॥

ಅರುಣೋದಯಕೆ ಗಂಗಾಧರ ಬರಲು – ಹದಿನಾರುವರುಷದ
ತರುಣೀರೂಪದಿ ಹರಿ ವನದೊಳಗಿರಲು – ಚರಣನಖಾಗ್ರದಿ
ಧರಣಿ ಬರೆಯುತ ನಿಂತಿರಲು – ಸೆರಗ ಪಿಡಿಯ ಬರಲು
ಕರದಿ ಶಂಖ ಗದೆ ಚಕ್ರ ತೋರಲು – ಹರನು ನಾಚಿ ತಲೆತಗ್ಗಿಸಿ ನಿಂತ ॥ ೪ ॥

ಮಂಗಳಾಂಗನೆ ಮಾರಜನಕನೇ –ನಾ ಮಾಡಿದ ತಪ್ಪು
ಹಿಂಗದೆ ಕ್ಷಮಿಸೋ ಯದುಕುಲತಿಲಕ – ವಕ್ಷದೊಳೊಪ್ಪುವ ನಿ–
ನ್ನಂಗನೆ ಅರಿಯಳು ನಖಮಹಿಮಾಂಕ – ಹೀಗೆನುತಲಿ ತವಕ
ರಂಗವಿಠಲನ ಪದಗಳ ಪಿಡಿದು ಸಾಷ್ಟಾಂಗವೆರಗಿ ಕೈಲಾಸಕೆ ನಡೆದ ॥ ೫ ॥

## ೨೦. ಶಿವ ಶಿವ ಶಿವ ಎನ್ನಿರೋ – ಮೂಜಗದವರೆಲ್ಲ

ಶಿವ ಶಿವ ಶಿವ ಎನ್ನಿರೋ – ಮೂಜಗದವರೆಲ್ಲ
ಶಿವ ಶಿವ ಶಿವ ಎನ್ನಿರೋ । ಪ ।

ಆಗಮ ಸಿದ್ಧಾಂತ ಮೂಲದ ಜಪವಿದು ಶಿವ ಶಿವ ಶಿವ ಎನ್ನಿರೋ – ನಿಮ್ಮ ।
ರೋಗದ ಮೂಲಪ ಕೆಡಿಪ ಔಷಧವಿದು ಶಿವ ಶಿವ ಶಿವ ಎನ್ನಿರೋ । ೧ ।

ಮನುಜ ಜನ್ಮದಿ ಹುಟ್ಟಿ ಮೈಮರೆಯದಿರಬೇಡಿ ಶಿವ ಶಿವ ಶಿವ ಎನ್ನಿರೋ ನಿಮ್ಮ ।
ತನುಮನ ಪ್ರಾಣವ ವ್ಯರ್ಥವ ಮಾಡದೆ ಶಿವ ಶಿವ ಶಿವ ಎನ್ನಿರೋ । ೨ ।

ಅಪರಾಧಕೋಟಿ ತ್ಯಜಿಸಬೇಕಾದರೆ ಶಿವ ಶಿವ ಶಿವ ಎನ್ನಿರೋ ಮುಂದೆ ।
ಉಪಮಿತರೋರ್ಮಿತರರಿಯದ ಜಪವಿದು ಶಿವ ಶಿವ ಶಿವ ಎನ್ನಿರೋ । ೩ ।

ಜವನ ಬಾಧೆಯ ನೀವು ಜಯಿಸಬೇಕಾದರೆ ಶಿವ ಶಿವ ಶಿವ ಎನ್ನಿರೋ ನಿಮ್ಮ ।
ಸವಿಮಲ ಮುಕ್ತಿಯ ಪಡೆಯಬೇಕಾದರೆ ಶಿವ ಶಿವ ಶಿವ ಎನ್ನಿರೋ । ೪ ।

ಭುವನಕೆ ಬಲ್ಲಿದಗಾಗಬೇಕಾದರೆ ಶಿವ ಶಿವ ಶಿವ ಎನ್ನಿರೋ – ನೀವು ।
ಭುವನ ಪದವಿಯನು ಪಡೆಯಬೇಕಾದರೆ ಶಿವ ಶಿವ ಶಿವ ಎನ್ನಿರೋ । ೫ ।

ಗುರುಲಿಂಗ ಜಂಗಮವ ಅರಿಯಬೇಕಾದರೆ ಶಿವ ಶಿವ ಎನ್ನಿರೋ –ಮುಂದೆ ।
ಪರಮಾತ್ಮನ ನೀವು ತಿಳಿಯಬೇಕಾದರೆ ಶಿವ ಶಿವ ಶಿವ ಎನ್ನಿರೋ । ೬ ।

ಪೃಥ್ವಿಗೆ ಸದ್ಗುರು ಆಗಬೇಕಾದರೆ ಶಿವ ಶಿವ ಶಿವ ಎನ್ನಿರೋ – ನೀವು ।
ತತ್ತ್ವಪತಿ ಆದಿಕೇಶವ ಕೂಡಬೇಕಾದರೆ ಶಿವ ಶಿವ ಶಿವ ಎನ್ನಿರೋ । ೭ ।

## ೨೧. ಕಂಡೆ ಕರುಣಾನಿಧಿಯ

ರಾಗ – ನಾದನಾಮಕ್ರಿಯೆ ತಾಳ – ಆದಿತಾಳ

ಕಂಡೆ ಕರುಣಾನಿಧಿಯ । ಗಂಗೆಯ ಮಂಡೆಯೊಳಿಟ್ಟ ದೊರೆಯ । ಪ ।
ರುಂಡಮಾಲೆಯ ಸಿರಿಯ ನೊಸಲೊಳು ಕೆಂಡಗಣ್ಣಿನ ಬಗೆಯ ಹರನ । ಅ.ಪ ।

ಗಜ–ಚರ್ಮಾಂಬರನ । ಗೌರಿ । ವರಜಗದೀಶ್ವರನ ।
ತ್ರಿಜಗನ್ಮೋಹನನ । ದಕ್ಷಾಧ್ವರಜಯನ ಕೆಡಿಸಿದನ ಶಿವನ । ಹರನ । ೧ ।

ಭಸಿತ ಭೂಷಿತಹರನ । ಭಕ್ತರ ವಶದೊಳಗಿರುತಿಹನ ।
ಪಶುಪತಿಯೆನಿಸುವನ । ವಸುಧೇಲಿ ಶಶಿಶೇಖರ ಶಿವನ । ಹರನ । ೨ ।

ಕಪ್ಪು ಕೊರಳ ಹರನ ಕಂದರ್ಪನ ಪಿತನ ಸಖನ ।
ಮುಪ್ಪುರ ಗೆಲಿದವನ । ಮುನಿಸುತ ಸರ್ಪಭೂಷಣ ಶಿವನ । ಹರನ । ೩ ।

ಕಾಮಿತ ಫಲವೀವನ । ಭಕುತರ ಪ್ರೇಮದಿ ಸಲಹುವನ ।
ರಾಮನಾಮ ಸ್ಮರನ । ರತಿಪತಿ ಕಾಮನ ಸಂಹರನ । ಶಿವನ । ೪ ।

ದರೆಗೆ ದಕ್ಷಿಣ ಕಾಶಿ । ಎನಿಸುವ ಪಂಪಾಪುರವಾಸಿ ।
ತಾರಕ ಉಪದೇಶಿ । ಪುರಂದರವಿಠಲ ಭಕ್ತಪೋಶಿ । ಹರನ । ೫ ।

## ೨೨. ಗೌರೀವರನೆ ಎನ್ನ ಮೊರೆ ಕೇಳೋ –

ರಾಗ – ನವರೋಜು ತಾಳ – ಆದಿತಾಳ

ಗೌರೀವರನೆ ಎನ್ನ ಮೊರೆ ಕೇಳೋ ಚೆನ್ನ
ಹೌರಾನೆ ಮತಿಯಿತ್ತುನ್ ಸಲಹಬೇಕೆನ್ನ । ಪ ।

ಗೌರವ ಗಾತುರ ತೌರಮನೆಯ ಹರ
ಕೌರವಾಂತಕನೊಳು ಶೌರಿಯ ತೋರಿಸೋ । ಅ.ಪ.।

ಮೃಗಲಾಂಛನ ಸನ್ಮೌಳಿ ಶಿವ ಮಹದೇವ ।
ತ್ರಿಗುಣಾತುಮ ಗಾತುರ ಭಕ್ತ ಸಂಜೀವ ।
ನಿಗಮತುರಗ ಪಾಪ ವನಮೂಲದಾವ ।
ಮೃಗಪಾಣಿ ಮೃತ್ಯುಂಜಯ ಜಯ ಸುಪ್ರಭಾತ । । ೧ ।

ನಗಪಗೆ ಮಗನನು ಮೃಗನೆವನದಿ ಕಾ–।
ಳಗಮಾಡಿ ಮೆಚ್ಚಿದೆ ಅಗಣಿತ ಗುಣಮಣಿ ।
ಯುಗಯುಗದಲಿ ವಾಲಗ ನಿನ್ನವರೊಳು ।
ಮುಗಳೆ ಮುಗಳೆ ಕೊಡು ಗಗನೇಶ ಜನಕ ॥ । ೨ ।

ಭವಹರ ತ್ರಿಯಂಬಕ ತ್ರಿಪುರಾರಾತಿ ।
ಪವನ ಸಪುತ ಸಪ್ತ ತಂದಿಹ ಖ್ಯಾತಿ ।
ಅವನಿಯೋಳ್ ಕೈಲಾಸವಾಸ ಅಪ್ರತಿ ।
ನವವಿಧಭಕುತಿಕೊಡು ಶಂಭು ಪಶುಪತಿ । । ೩ ।

ದಿವಸ ದಿವಸ ವೈಶ್ರವಣ ಬಾಂಧವ ದೇ।
ಹವೆ ನಿನಗೊಪ್ಪಿತು ಅವನಿಯೊಳುತ್ತಮ ।
ಶ್ರವಣದೊಳಗೆ ರಾಘವನ ಕಥಾಮೃತ ।
ಸವಿದೋರುವುದೋ ಭುವನ ಪವಿತ್ರ । । ೪ ।

ಅಜಭೃಕುಟಸಂಭೂತ ಭೂತಗಣೇಶ ।
ಭುಜಗಕುಂಡಲ ಮಾಲಾ ವಿಭೂತಿ ಭೂಷ ।
ನಿಜ ಮಹಾಸ್ಮಶಾನವಾಸ ಉಗ್ರೇಶ ।
ತ್ರಿಜಗಪಾವನ ಗಂಗಾಧರ ವಿದ್ವೇಶ । । ೫ ।

ಸುಜನ ಹೃದಯ ಪಂಕಜದೊಳ್ ಮಿನುಗುವ
ಗಜಪಾಲಕ ವಿಜಯವಿಠ್ಠಲನಂಘ್ರಿ ।
ಭಜನೆಯ ಕೊಡು ಭೂಭುಜ ದೇವೋತ್ತಮ ।
ರಜತಾದ್ರಿನಿಲಯನೆ ಗಜ ಅಜಿನಾಂಬರ ॥ ೬ ॥

## ೨೩. ಬಲ್ಲಹ ಮುಟ್ಟದಿರೆನ್ನನು

ಬಲ್ಲಹ ಮುಟ್ಟದಿರೆನ್ನನು । ಪ ।

ಬಲ್ಲಹ ಮುಟ್ಟದಿರೆನ್ನ ಬಗೆಯ ಮೋಹನ್ನ ರನ್ನ
ಮಲ್ಲಿಗೆಗೋಲಮದಭಂಗ್ ಮಧುರೇಶ ಲಿಂಗ । ಅ.ಪ.।

ಕನ್ನವೆಣ್ಣ ಕಂಡಮ್ಯಾಲೆ ಕದಡಿತು ನಿನ್ನ ಲೀಲೆ
ನನ್ನ ಕೂಡಿನ್ನ್ಯಾತರ ಲಲ್ಲೆ ನಗೆಯ ಬಲ್ಲೆ
ಇನ್ನು ನಾನ್ಯಾತಕೆ ಬೇಕು ಇಷ್ಟರ ಬಗೆಯ ಸಾಕು
ಮುನ್ನಿನ ಗುಣ ನಿನ್ನಲಿಲ್ಲ ಮುದ್ದಿಸಸಲ್ಲ । ೧ ।
ಮಂಡೆಯೊಳಗೆ ಪೆಣ್ಣ ಮಡುಗುವರೆ ಮುಕ್ಕಣ್ಣ
ಲೆಂಡತನವ್ಯಾತಕೆನ್ನೊಳು ಲೇಸು ಕೇಳು
ಕಂಡು ನಾ ತಾಳುವುದೆಲ್ಲ ಕಪಟ ಎಳಿನಷ್ಟಿಲ್ಲ
ಉಂಡಮ್ಯಾಲಿನ್ಯಾತಕೊ ಹಟ ಉಣ್ಣೆನೊ ಬೀಜ । ೨ ।

ಯತಿಕುಲಕಲ್ಪಭೂಜ ಎಸೆವ ಶ್ರೀರವಿತೇಜ
ಸತತ ಶ್ರೀ ಹಯವದನನ್ನ ಸಖ ಮೋಹನ್ನ
ಗತಿ ನೀನೇ ದೇವೋತ್ತುಂಗ ಗಂಭೀರ ನವಮೋಹನಾಂಗ
ಮತಿಯಿತ್ತು ಕೊಡೊ ಎನ್ನ ಮಧುರೇಶನ್ನ । ೩ ।

## ೨೪. ಶಿವಗಾಗಿ ಶಿವ ಬಂದ – ಶ್ಯಾಮಸುಂದರ ದಾಸರ ಮುಂಡಿಗೆ

ಶಿವಗಾಗಿ ಶಿವ ಬಂದ
ಶಿವ ಕುಡಿದ
ಶಿವ ಕಡಿದ
ಶಿವ ಸತ್ತ
ಶಿವನ ಅರ್ಧಾಂಗಿ ಶಿವ ಶಿವ ಎಂದಳು

ಶಿವಗಾಗಿ –ನೀರಿಗಾಗಿ, ಶಿವ–ನರಿಯು ಬಂದಿತು.
ಶಿವ–ನರಿಯು ಕುಡಿದ – ನೀರನ್ನು ಕುಡಿಯಿತು
ಶಿವ – ಸರ್ಪವೂ ಕಡಿದ – ಕ್ಚಚ್ಚಿತು
ಶಿವ – ನರಿಯು, ಸತ್ತ – ಸತ್ತಿತು
ಶಿವನ ಅರ್ಧಾಂಗಿ – ಹೆಣ್ಣು ನರಿಯು
ಶಿವ ಶಿವ – ಶಿವ ಶಿವ ಎಂದು ಮರುಗಿತು

ಇಲ್ಲಿ ಶಿವ ಶಬ್ದಕ್ಕೆ ಶಿವನೇ ಸತ್ತನೆಂದು ಅರ್ಥ ಬರುವಂತೆ ಮಂಡಿಗೆ ರಚಿಸಲಾಗಿದೆ. ಶಿವ ಶಬ್ದಕ್ಕೆ ನರಿ, ಹೆಣ್ಣುನರಿ (ಶಿವಾ), ಹಾವು ಮುಂತಾದ ಅರ್ಥಗಳಿವೆ.